

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1102 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 15-03-2021 |
| ಪ್ರಶ್ನೆ | ಉತ್ತರ |

**(ಅ)** ರಾಜ್ಯದಲ್ಲಿರುವ ಒಟ್ಟು ವಿಶ್ವವಿದ್ಯಾನಿಲಯಗಳ ಸಂಖ್ಯೆ ಎಷ್ಟು; ಇವುಗಳಿಗೆ ಮಂಜೂರಾದ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು; ಇದರಲ್ಲಿ ಖಾಲಿ ಹುದ್ದೆಗಳ ಸಂಖ್ಯೆ ಎಷ್ಟು;

ರಾಜ್ಯದ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿಯಲ್ಲಿ ಒಟ್ಟು 23 ವಿಶ್ವವಿದ್ಯಾನಿಲಯಗಳಿವೆ. ವಿಶ್ವವಿದ್ಯಾನಿಲಯಗಳಲ್ಲಿ ಮಂಜೂರಾದ ಹಾಗೂ ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳ ವಿವರಗಳ ಈ ಕೆಳಕಂಡಂತಿರುತ್ತದೆ;

| ಕ್ರ. ಸಂ. | ವಿಶ್ವವಿದ್ಯಾಲಯದ ಹೆಸರು | ಮಂಜೂರಾದ ಬೋಧಕ ಹುದ್ದೆ | ಖಾಲಿ ಇರುವ ಬೋಧಕ ಹುದ್ದೆ | ಮಂಜೂರಾದ ಬೋಧಕೇತರ ಹುದ್ದೆ | ಖಾಲಿ ಇರುವ ಬೋಧಕೇತರ ಹುದ್ದೆ |
|---|---|---|---|---|---|
| 1 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ | 151 | 56 | 137 | 97 |
| 2 | ಕನ್ನಡ ವಿಶ್ವವಿದ್ಯಾಲಯ | 73 | 17 | 234 | 71 |
| 3 | ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ | 120 | 33 | 272 | 140 |
| 4 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ | 137 | 61 | 574 | 366 |
| 5 | ಗುಲ್ಬರ್ಗ ವಿಶ್ವವಿದ್ಯಾಲಯ | 248 | 189 | 707 | 486 |
| 6 | ಬೆಂಗಳೂರು ನಗರ ವಿಶ್ವವಿದ್ಯಾಲಯ | 161 | 144 | 124 | 110 |
| 7 | ಕರ್ನಾಟಕ ಜಾನಪದ ವಿಶ್ವವಿದ್ಯಾಲಯ | 24 | 24 | 32 | 31 |
| 8 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ | 103 | 36 | 173 | 157 |
| 9 | ತುಮಕೂರು ವಿಶ್ವವಿದ್ಯಾಲಯ | 217 | 85 | 214 | 168 |
| 10 | ದಾವಣಗೆರೆ ವಿಶ್ವವಿದ್ಯಾಲಯ | 164 | 25 | 178 | 147 |
| 11 | ಕುವೆಂಪು ವಿಶ್ವವಿದ್ಯಾಲಯ | 238 | 50 | 590 | 275 |
| 12 | ಮೈಸೂರು ವಿಶ್ವವಿದ್ಯಾಲಯ | 664 | 368 | 1349 | 782 |
| 13 | ಬೆಂಗಳೂರು ವಿಶ್ವವಿದ್ಯಾಲಯ | 365 | 203 | 1383 | 828 |
| 14 | ಕರ್ನಾಟಕ ರಾಜ್ಯ ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ | 15 | 15 | 19 | 18 |
| 15 | ಕರ್ನಾಟಕ ವಿಶ್ವವಿದ್ಯಾಲಯ | 578 | 323 | 1368 | 949 |
| 16 | ಸಂಸ್ಕೃತ ವಿಶ್ವವಿದ್ಯಾಲಯ | 71 | 32 | 62 | 25 |
| 17 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ | 228 | 86 | 425 | 190 |
| 18 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ | 67 | 59 | 97 | 86 |
| 19 | ಮಂಗಳೂರು ವಿಶ್ವವಿದ್ಯಾಲಯ | 273 | 98 | 547 | 307 |
| 20 | ರಾಯಚೂರು ವಿಶ್ವವಿದ್ಯಾನಿಲಯ | ಈ ವಿಶ್ವವಿದ್ಯಾನಿಲಯಗಳು 2020ನೇ ಸಾಲಿನಿಂದ ಪ್ರಾರಂಭಗೊಂಡಿದ್ದು, ಪ್ರಸ್ತುತ ಯಾವುದೇ ಬೋಧಕ/ ಬೋಧಕೇತರ ಹುದ್ದೆಗಳು ಸೃಜನೆಯಾಗಿರುವುದಿಲ್ಲ. | | | |
| 21 | ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾನಿಲಯ | | | | |
| 22 | ನೃಪತುಂಗ ವಿಶ್ವವಿದ್ಯಾನಿಲಯ | | | | |
| 23 | ಮಂಡ್ಯ ವಿಶ್ವವಿದ್ಯಾನಿಲಯ | | | | |
| | **ಒಟ್ಟು ಹುದ್ದೆಗಳ ಸಂಖ್ಯೆ** | **3897** | **1904** | **8485** | **5233** |

| | | |
|---|---|---|
| (ಆ) | ಖಾಲಿ ಹುದ್ದೆಗಳಿಂದ ಪಾಠ, ಮೌಲ್ಯಮಾಪನ, ಫಲಿತಾಂಶ ವಿಳಂಭಕ್ಕೆ ಕಾರಣವಾಗುತ್ತಿರುವುದು ಸರ್ಕಾರದ ಗಮನದಲ್ಲಿ ಇದೆಯೇ; | ಇಲ್ಲ.<br>ರಾಜ್ಯದ ವಿಶ್ವವಿದ್ಯಾನಿಲಯಗಳಲ್ಲಿ ಶೇ. 50ಕ್ಕಿಂತ ಹೆಚ್ಚು ಬೋಧಕ ಹುದ್ದೆಗಳು ಹಾಗೂ ಶೇ. 40ಕ್ಕಿಂತ ಹೆಚ್ಚು ಬೋಧಕೇತರ ಹುದ್ದೆಗಳು ಭರ್ತಿಯಾಗಿರುತ್ತವೆ. ಆದಾಗ್ಯೂ ಸಹ, ವಿದ್ಯಾರ್ಥಿಗಳ ಪಾಠಪ್ರವಚನಕ್ಕೆ ತೊಂದರೆಯಾಗದಂತೆ ಅರ್ಹ ವಿದ್ಯಾರ್ಹತೆಯನ್ನು ಹೊಂದಿರುವ ಅತಿಥಿ ಉಪನ್ಯಾಸಕ/ತಾತ್ಕಾಲಿಕ ಉಪನ್ಯಾಸಕರುಗಳನ್ನು ನೇಮಕ ಮಾಡಿಕೊಂಡು ವಿಶ್ವವಿದ್ಯಾನಿಲಯಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ಆಡಳಿತಾತ್ಮಕ ಚಟುವಟಿಕೆಗಳಿಗೆ ತೊಂದರೆಯಾಗದಂತೆ ಗುತ್ತಿಗೆ/ ಹೊರಗುತ್ತಿಗೆ/ನಿಯೋಜನೆ ಮೇಲೆ ಸಿಬ್ಬಂದಿಗಳನ್ನು ನೇಮಕ ಮಾಡಿಕೊಂಡು ಆಡಳಿತಾತ್ಮಕ ಚಟುವಟಿಕೆಗಳನ್ನು ಸುಗಮವಾಗಿ ನಡೆಸಲಾಗುತ್ತಿದೆ. ವಿಶ್ವವಿದ್ಯಾನಿಲಯಗಳಲ್ಲಿ ಮೌಲ್ಯಮಾಪನ ಮಾಡಿ ಪರೀಕ್ಷಾ ಫಲಿತಾಂಶವನ್ನು ಪ್ರಕಟಿಸುವಲ್ಲಿ ವಿಳಂಭವಾಗಿರುವುದಿಲ್ಲ. |
| (ಇ) | ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲಾಗುವುದು ಯಾವಾಗ? | ಆರ್ಥಿಕ ಇಲಾಖೆಯ ಸುತ್ತೋಲೆ ಸಂ. ಆಇ 03 ಬಿಇಎಂ 2020, ದಿನಾಂಕ: 06-07-2020ರಲ್ಲಿ 'ರಾಜ್ಯದಲ್ಲಿ ಕೋವಿಡ್-19ನಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ, ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. ಇದಕ್ಕಾಗಿ, ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳು ಮತ್ತು ಬ್ಯಾಕ್ ಲಾಗ್ ಹುದ್ದೆಗಳೂ ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿರುತ್ತದೆ.<br>ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವ ಸಂಬಂಧ ವಿಧಿಸಿರುವ ನಿರ್ಬಂಧಗಳನ್ನು ಆರ್ಥಿಕ ಇಲಾಖೆಯು ತೆರವುಗೊಳಿಸಿದ ನಂತರ ವಿಶ್ವವಿದ್ಯಾನಿಲಯಗಳಲ್ಲಿ ಖಾಲಿ ಇರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳಲು ಕ್ರಮವಹಿಸಲಾಗುವುದು. |

ಸಂಖ್ಯೆ: ಇಡಿ 94 ಯುಎನ್ಇ 2021

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ).